ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ದೇವಸ್ಥಾನಗಳಿಗೆ ಸೇರಿದ ಜಮೀನಿನ ಕುರಿತು

ಶ್ರೀ ಎನ್.ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) :-

258 (203) ಮಾನ್ಯ ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಭೂ ಸುಧಾರಣಾ ಕಾಯ್ದೆಯ ಅನ್ವಯ ಉಳುವವನೇ ಹೊಲದೊಡೆಯ ಎಂಬ ಕಾರಣಕ್ಕಾಗಿ ರಾಜ್ಯದ ಮುಜರಾಯಿ ಇಲಾಖೆಯ ದೇವಸ್ಥಾನಗಳಿಗೆ ಸೇರಿದ ಎಷ್ಟು ಎಕರೆ ಭೂಮಿಯನ್ನು ಇದುವರೆಗೆ ಪರಭಾರೆ ಮಾಡಲಾಗಿದೆ; (ಜಿಲ್ಲಾವಾರು ವಿವರ ನೀಡುವುದು)

(ಆ) ಉಳುವವನೇ ಹೊಲದೊಡೆಯ ಎಂಬ ಕಾರಣಕ್ಕಾಗಿ ಕೃಷಿ ಚಟುವಟಿಕೆಗಳನ್ನು ಉತ್ತೇಜಿಸುವ ಸಲುವಾಗಿ ದೇವಸ್ಥಾನಗಳ ಉಂಬಳಿ ಭೂಮಿಯನ್ನು ಪರಭಾರೆ ಮಾಡಿರುವ ಎಷ್ಟು ಎಕರೆ ಭೂ ಪ್ರದೇಶದಲ್ಲಿ ಇಂದಿಗೂ ಕೃಷಿ ಚಟುವಟಿಕೆಗಳನ್ನು ನಡೆಸಲಾಗುತ್ತಿದೆ;

(ಇ) ದೇವಸ್ಥಾನಗಳ ಉಂಬಳ ಭೂಮಿಯನ್ನು ಭೂ ಸುಧಾರಣಾ ಕಾಯ್ದೆಯ ಅನ್ವಯ ಪಡೆದುಕೊಂಡು ಕೃಷಿ ಚಟುವಟಿಕೆ ನಡೆಸದೆ ಸದರಿ ಭೂಮಿಯನ್ನು ಕೃಷಿಯೇತರ ಉದ್ದೇಶಗಳಿಗಾಗಿ ಎಷು ಎಕರೆ ಭೂಮಿಯನ್ನು ಪರಿವರ್ತಿಸಲಾಗಿದೆ; (ಜಿಲ್ಲಾವಾರು ವಿವರ ನೀಡುವುದು)

(ಈ) ದೇವಸ್ಥಾನಗಳ ಉಂಬಳಿ ಭೂಮಿಯನ್ನು ಭೂ ಸುಧಾರಣಾ ಕಾಯ್ದೆಯ ಅನ್ವಯ ಪಡೆದುಕೊಂಡ ಕೃಷಿ ಚಟುವಟಿಕೆ ನಡೆಸದೆ ಮಾರಾಟ ಮಾಡಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಉದಾಹರಣೆಗಳು ಎಷ್ಟಿವೆ; (ಜಿಲ್ಲಾವಾರು ವಿವರ ನೀಡುವುದು)

(ಉ) ದೇವಸ್ಥಾನಗಳ ಉಂಬಳಿ ಭೂಮಿಯನ್ನು ಭೂ ಸುಧಾರಣಾ ಕಾಯ್ದೆಯ ಅನ್ವಯ ಪಡೆದುಕೊಂಡು ಕೃಷಿ ಚಟುವಟಿಕೆ ನಡೆಸದೆ ಇರುವ ಭೂಮಿಯನ್ನು ಹಿಂಪಡೆಯಲು ಸರಕಾರ ಕೈಗೊಂಡ ಕ್ರಮಗಳೇನು ?